## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **97** |
| ಉತ್ತರಿಸಬೇಕಾದ ದಿನಾಂಕ | : | 16.02.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ನೆಲ್ಲಿಹುದಿಕೇರಿ ಸೇರಿದಂತೆ ಜಿಲ್ಲೆಯ ವಿವಿಧ ಭಾಗಗಳ ಮಳೆ ಹಾನಿ ಸಂತ್ರಸ್ತರಿಗೆ ಹಂಚಿಕೆ ಮಾಡಲು ನಿವೇಶನಗಳನ್ನು ಗುರುತಿಸಿದ್ದರೂ ಕೂಡ ಇದುವರೆಗೂ ಹಕ್ಕುಪತ್ರ ನೀಡದೆ ಇರುವುದರಿಂದ, ಅವರು ಮನೆಗಳನ್ನು ನಿರ್ಮಿಸಿಕೊಳ್ಳಲು ಸಾಧ್ಯಾವಾಗದೇ ತೊಂದರೆಗೊಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br>ಕೊಡಗು ಜಿಲ್ಲೆಯ ನೆಲ್ಲಿಹುದಿಕೇರಿ, ವಾಲ್ನೂರು ತ್ಯಾಗತ್ತೂರು, ನಂಜರಾಯಪಟ್ಟಣ, ಗುಡ್ಡೆಹೊಸೂರು ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಪ್ರತಿ ವರ್ಷ ನದಿ ದಡದ ಮನೆಗಳು ಕಾವೇರಿ ನದಿ ಪ್ರವಾಹಕ್ಕೆ ಒಳಪಡುತ್ತಿದ್ದು, ಇವರಿಗೆ ಶಾಶ್ವತ ನಿವೇಶನ/ಪುನರ್ವಸತಿ ಒದಗಿಸಲು 2019 ರಲ್ಲಿ ಅಭ್ಯತ್ ಮಂಗಲ ಗ್ರಾಮದ ಸರ್ವೆ ನಂ. 87/2ರಲ್ಲಿ 8.22 ಎಕರೆ ಸರ್ಕಾರಿ ಜಾಗ ಕಾಯ್ದಿರಿಸಿ, ಕಾರ್ಯನಿರ್ವಾಹಕಾಧಿಕಾರಿಗಳು,ತಾಲ್ಲೂಕು ಪಂಚಾಯಿತಿ ಸೋಮವಾರಪೇಟೆ ಇವರಿಗೆ ಹಸ್ತಾಂತರಿಸಲಾಗಿದ್ದು, ಸದರಿ ಜಾಗಕ್ಕೆ ಅಗತ್ಯ ಮೂಲಭೂತ ಸೌಕರ್ಯಗಳಾದ ರಸ್ತೆ, ನೀರು, ವಿದ್ಯುಚ್ಛಕ್ತಿ ಸೌಲಭ್ಯ ಒದಗಿಸುವ ಪ್ರಕ್ರಿಯೆ ಪ್ರಾರಂಭಿಸಬೇಕಾಗಿರುವುದಾಗಿ, ಈ ಜಾಗದಲ್ಲಿರುವ ಕಾಡು ಜಾತಿಯ ಮರಗಳನ್ನು ತೆರವುಗೊಳಿಸಲು ಕ್ರಮ ವಹಿಸಬೇಕಾಗಿರುವುದರಿಂದ, ಈ ಕಾರ್ಯಗಳು ಮುಗಿದ ಕೂಡಲೇ ಹಕ್ಕುಪತ್ರವನ್ನು ನೀಡಲು ಕ್ರಮ ವಹಿಸಲಾಗುವುದು |
| ಆ) | ಬಂದಿದ್ದಲ್ಲಿ ಇದುವರೆಗೆ ಹಕ್ಕುಪತ್ರಗಳನ್ನು ನೀಡದಿರಲು ಕಾರಣಗಳೇನು; | |
| ಇ) | ಜಿಲ್ಲೆಯಲ್ಲಿ ಎಷ್ಟು ಜನ ಸಂತ್ರಸ್ತರನ್ನು ನಿವೇಶನದ ಹಕ್ಕುಪತ್ರ ನೀಡಲು ಗುರುತಿಸಲಾಗಿದೆ; | ಕೊಡಗು ಜಿಲ್ಲೆಯಲ್ಲಿ 95 ಜನ ಸಂತ್ರಸ್ತರನ್ನು ಗುರುತಿಸಿದ್ದು, ನಿವೇಶನ ಹಂಚಿಕೆ ಮಾಡಲು ಅಭ್ಯತ್ ಮಂಗಲ ಗ್ರಾಮದ ಸರ್ವೆ ನಂ. 87/2 ರಲ್ಲಿ 8.22 ಎಕರೆ ಸರ್ಕಾರಿ ಜಾಗವನ್ನು ಕಾಯ್ದಿರಿಸಿದ್ದು, ಈವರೆಗೂ ಫಲಾನುಭವಿಗಳಿಗೆ ಹಕ್ಕುಪತ್ರ ಹಂಚಿಕೆ ಮಾಡಿರುವುದಿಲ್ಲ. ಅಭ್ಯತ್ ಮಂಗಲ ಗ್ರಾಮದ ಸರ್ವೆ ನಂ. 87/2ರಲ್ಲಿ ಮರ ತೆರವು ಮತ್ತು ಮೂಲಭೂತ ಸೌಕರ್ಯ ಕಲ್ಪಿಸಿದ ಕೂಡಲೇ ಹಕ್ಕುಪತ್ರ ನೀಡಲಾಗುವುದು. |
| ಈ) | ಇದುವರೆಗೆ ಎಷ್ಟು ಜನ ಸಂತ್ರಸ್ತರಿಗೆ ಹಕ್ಕುಪತ್ರ ನೀಡಲಾಗಿದೆ; ಹಕ್ಕುಪತ್ರ ನೀಡಲು ಬಾಕಿ ಇರುವ ಸಂತ್ರಸ್ತರ ಸಂಖ್ಯೆ ಎಷ್ಟು; | |
| ಉ) | ಹಕ್ಕುಪತ್ರ ನೀಡಲು ಬಾಕಿ ಇರುವ ಸಂತ್ರಸ್ತರಿಗೆ ಯಾವಾಗ ಹಕ್ಕುಪತ್ರ ನೀಡಲಾಗುವುದು ? | |

ಸಂಖ್ಯೆ :ವಇ 38 ಹೆಚ್‌ಎಎಂ 2022

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು